# ಕರ್ನಾಟಕ ವಿಧಾನ ಪರಿಷತ್ತು.

1. ಚುಕ್ಕೆ ಗುರುತಿಲ್ಲದ ಪ್ರಶ್ನೆ : 1309
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 21-12-2018
4. ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೆಟ್ರೋ 2ನೇ ಹಂತದ ಕಾಮಗಾರಿಯಲ್ಲಿ ಶಿವಾಜಿನಗರದಿಂದ ನಾಗವಾರದವರೆಗೆ ಹಾಗೂ ನಾಗವಾರದಿಂದ ಹೆಬ್ಬಾಳದ ಮೂಲಕ ಕೆಂಪೇಗೌಡ ವಿಮಾನ ನಿಲ್ದಾಣಕ್ಕೆ ಮಾರ್ಗ ಬದಲಾವಣೆ ಮಾಡಲಾಗಿದೆಯೇ; | ಮೆಟ್ರೋ 2ನೇ ಹಂತದ ಕಾಮಗಾರಿಯಲ್ಲಿ ಶಿವಾಜಿನಗರದಿಂದ ನಾಗವಾರದವರೆಗೆ ಮಾರ್ಗ ಬದಲಾವಣೆ ಮಾಡಿರುವುದಿಲ್ಲ.<br><br>ನಾಗವಾರದಿಂದ ಹೆಬ್ಬಾಳದ ಮೂಲಕ ಕೆಂಪೇಗೌಡ ನಿಲ್ದಾಣಕ್ಕೆ ಮಾರ್ಗ ಬದಲಾವಣೆಯ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಹಾಗಿದಲ್ಲಿ, ಮಾರ್ಗ ಬದಲಾಯಿಸಲು ಕಾರಣಗಳೇನು; | ಅನುಮೋದಿಸಲಾದ ಆರ್.ಕೆ.ಹೆಗ್ಡೆ ನಗರ ಹಾಗೂ ಜಕ್ಕೂರು ಕ್ರಾಸ್ ಮಾರ್ಗವಾಗಿ ಪ್ರಸ್ತಾಪಿಸಲಾದ ಏರ್‌ಪೋರ್ಟ್ ಮೆಟ್ರೋ ಕಾಮಗಾರಿಯನ್ನು ಪ್ರಾರಂಭಿಸಲು ಭೌಗೋಳಿಕ ಅಧ್ಯಯನ ನಡೆಸುತ್ತಿರುವ ಸಂದರ್ಭದಲ್ಲಿ ರಸ್ತೆಯ ಬಹುತೇಕ ಮಧ್ಯಭಾಗದಲ್ಲಿ ಮಂಗಳೂರಿನಿಂದ ಬೆಂಗಳೂರಿಗೆ ಸರಬರಾಜು ಆಗುವ ಪೆಟ್ರೋಲಿಯಂ ಉತ್ಪನ್ನಗಳ ಮುಖ್ಯ ಪೈಪ್‌ಲೈನ್ ಹಾದುಹೋಗಿರುವುದು ತಿಳಿದು ಬಂದಿರುತ್ತದೆ. ಸದರಿ ಪೈಪ್‌ನ ಇಕ್ಕೆಲಗಳಲ್ಲಿ ಒಂಭತ್ತು ಮೀಟರ್ ಅಗಲದ ಸ್ಥಳವು (ಒಟ್ಟು 18 ಮೀಟರ್ ಅಗಲ) ಪೆಟ್ರೋಲಿಯಂ ಹಾಗೂ ಮಿನರಲ್ಸ್ ಇಲಾಖೆಯ ಸುಪರ್ದಿಯಲ್ಲಿದ್ದು, ಯಾವುದೇ ತೆರನಾದ ಸಿವಿಲ್ ಕಾಮಗಾರಿಗೆ ಅವಕಾಶವಿರುವುದಿಲ್ಲ. ಹಾಗೂ ಇದೇ ರಸ್ತೆಯಲ್ಲಿ 1000 mm ವ್ಯಾಸ ಮತ್ತು 300 mm ವ್ಯಾಸದ ಎರಡು ಮುಖ್ಯ ನೀರು ಸರಬರಾಜು ಪೈಪ್‌ಲೈನ್‌ಗಳು ಹಾದುಹೋಗಿರುತ್ತವೆ. ಈ ಕಾರಣದಿಂದ ಮೆಟ್ರೋ ಕಂಬಗಳನ್ನು ರಸ್ತೆಯ ಮಧ್ಯಭಾಗದಲ್ಲಿ ನಿರ್ಮಿಸಲು ಸಾಧ್ಯವಾಗುತ್ತಿಲ್ಲ. ಒಂದು ವೇಳೆ ರಸ್ತೆಯ ಬದಿಗೆ ತೆಗೆದುಕೊಳ್ಳುವುದಾದಲ್ಲಿ ಸಾಕಷ್ಟು ವಸತಿ ಗೃಹಗಳನ್ನು ತೆರವುಗೊಳಿಸಿ ಭೂ ಸ್ವಾಧೀನಪಡಿಸಿಕೊಳ್ಳಬೇಕಾಗುವುದರಿಂದ ಸದರಿ ವಿಚಾರವು ನಿಯಂತ್ರಿಕವಾಗಿ ಹಾಗೂ ತಾಂತ್ರಿಕವಾಗಿ ಅಪ್ರಸ್ತುತವಾಗಿರುತ್ತದೆ. ಹಾಗೂ ಪ್ರಸ್ತುತ ಏರ್‌ಪೋರ್ಟ್ ಮಾರ್ಗಕ್ಕೆ ಸಂಪರ್ಕ ಕಲ್ಪಿಸುವ ಗೊಟ್ಟಿಗೆರೆ – ನಾಗವಾರ ಮಾರ್ಗದ (ರೀಚ್-6 ಯುಜಿ) ಕಾಮಗಾರಿ ಮುಕ್ತಾಯ ತಡವಾಗುವ ಸಾಧ್ಯತೆ ಇರುವುದರಿಂದ ಏರ್‌ಪೋರ್ಟ್ ಮೆಟ್ರೋ ಮಾರ್ಗವು ಕೂಡಾ ತಡವಾಗಬಹುದು. ಇದರಿಂದಾಗಿ ಏರ್‌ಪೋರ್ಟ್ ಮೆಟ್ರೋ ಮಾರ್ಗವನ್ನು ಹೆಬ್ಬಾಳದ ನಂತರ ಹೊರವರ್ತುಲ ರಸ್ತೆ ಮಾರ್ಗದಲ್ಲಿ ಕೆ.ಆರ್.ಪುರಂವರೆಗೆ ಮುಂದುವರಿಸಲು ಪ್ರಸ್ತಾವನೆ ಮಂಡಿಸಲಾಗಿದೆ.<br><br>ಇದರಿಂದ, ಮಾಹಿತಿ ತಂತ್ರಜ್ಞಾನದ ವ್ಯವಹಾರ ಕ್ಷೇತ್ರವಾದ ವೈಟ್ ಫೀಲ್ಡ್ ಹಾಗೂ ಎಲೆಕ್ಟ್ರಾನಿಕ್ ಸಿಟಿಗಳಿಗೂ ಏರ್‌ಪೋರ್ಟ್ ಮೆಟ್ರೋ ಸಂಪರ್ಕ ತ್ವರಿತವಾಗಿ ಲಭಿಸಿದಂತಾಗುತ್ತದೆ. |

| | | |
|---|---|---|
| ಇ) | ಶಿವಾಜಿನಗರದಿಂದ ನಾಗವಾರದವರೆಗೆ ಎಲಿವೇಟೆಡ್ ಮಾರ್ಗ ಮಾಡುವ ಉದ್ದೇಶ ವಿದೆಯೇ ? | ಶಿವಾಜಿನಗರದಿಂದ ನಾಗವಾರದವರೆಗೆ ಎಲಿವೇಟೆಡ್ ಮಾರ್ಗ ಮಾಡುವ ಉದ್ದೇಶವಿರುವುದಿಲ್ಲ. |
| ಈ) | ಪ್ರಸ್ತುತ ನಾಗವಾರ ಜಂಕ್ಷನ್ ನಿಂದ ಹೆಬ್ಬಾಳ ಮಾರ್ಗವಾಗಿ ಮೆಟ್ರೋ ಮಾರ್ಗ ಬದಲಾವಣೆ ಆಗಿದ್ದರೂ ಸಹ ನಾಗವಾರ ಜಂಕ್ಷನ್ ನಿಂದ ಎಲಿಮೆಂಟ್ಸ್ ಮಾಲ್‌ವರೆಗೆ ಕರ್ನಾಟಕ ಪ್ರದೇಶಾಭಿವೃದ್ದಿ ಮಂಡಳಿ (ಕೆ.ಐ.ಎ.ಡಿ.ಬಿ) ರವರು ಭೂಸ್ವಾಧೀನ ಪ್ರಕ್ರಿಯೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ ನಾಗವಾರ ಜಂಕ್ಷನ್ ನಿಂದ ಹೆಬ್ಬಾಳದ ಮೂಲಕ ಮೆಟ್ರೋ ಮಾರ್ಗದ ಬದಲಾವಣೆ ಪ್ರಸ್ತಾಪವಾಗಿದ್ದರೂ ಸಹ ಗೊಟ್ಟಿಗೆರೆ–ನಾಗವಾರ ಮಾರ್ಗದ ಕೊನೆಯ ನಿಲ್ದಾಣವಾದ ನಾಗವಾರ ಮೆಟ್ರೋ ಸ್ಟೇಷನ್ ಹಾಗೂ ನಿಲ್ದಾಣದ ನಂತರ 445 ಮೀ. ಉದ್ದದ ಟರ್ನ್ ಬ್ಯಾಕ್ ವ್ಯವಸ್ಥೆ (Turn Back Facility) ಕಲ್ಪಿಸುವ ಸಲುವಾಗಿ ಭೂಮಿಯ ಅಗತ್ಯವಿರುವುದರಿಂದ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಿಂದ (ಕೆ.ಐ.ಎ.ಡಿ.ಬಿ) ಭೂಸ್ವಾಧೀನ ಕಾರ್ಯ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಉ) | ಹಾಗಿದ್ದಲ್ಲಿ, ಸದರಿ ಪ್ರದೇಶವನ್ನು ಭೂಸ್ವಾಧೀನದಿಂದ ಕೈಬಿಡಲಾಗುವುದೇ; | ಸ್ವಾಧೀನಪಡಿಸಿಕೊಳ್ಳುವ ಭೂಮಿ ಗೊಟ್ಟಿಗೆರೆ– ನಾಗವಾರ ಮಾರ್ಗಕ್ಕೆ ಶಾಶ್ವತವಾಗಿ ಬೇಕಾಗಿರುವುದರಿಂದ ಭೂಸ್ವಾಧೀನದಿಂದ ಕೈಬಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಊ) | ಭೂ ಮಾಲೀಕರಿಂದ ಧೀರ್ಘ ಕಾಲದ ಗುತ್ತಿಗೆ (ಉದಾಹರಣೆಗೆ 20–25 ವರ್ಷಗಳವರೆಗೆ) ಪಡೆದು ನೊಂದಾಯಿತ ಒಪ್ಪಂದ (ರಿಜಿಸ್ಟರ್ಡ್ ಡೀಡ್) ಮಾಡಿಕೊಂಡು ವ್ಯವಹಾರ ನಡೆಸುತ್ತಿರುವ ಗುತ್ತಿಗೆದಾರರಿಗೆ ಯಾವ ರೀತಿಯಲ್ಲಿ ಪುನರ್ವಸತಿ ಹಾಗೂ ಪರಿಹಾರ ನೀಡಲಾಗುವುದು? (ಪೂರ್ಣ ವಿವರ ನೀಡುವುದು). | ಭೂ ಮಾಲೀಕರಿಂದ ಧೀರ್ಘಕಾಲದ ಗುತ್ತಿಗೆ ಪಡೆದು ನೊಂದಾಯಿತ ಒಪ್ಪಂದ ಮಾಡಿಕೊಂಡು ವ್ಯವಹಾರ ನಡೆಸುತ್ತಿರುವವರಿಗೆ ಈ ಕೆಳಗೆ ವಿವರಿಸಿದ ರೀತಿಯಲ್ಲಿ ಪುನರ್ವಸತಿ ಹಾಗೂ ಪರಿಹಾರ ನೀಡಲಾಗುವುದು.<br>1. ಸಾಗಾಣಿಕೆ ಭತ್ಯೆ – ರೂ.15000/–<br>2. ವ್ಯಾಪಾರ ನಷ್ಟ ಭತ್ಯೆ – ರೂ. 1,00,000/– ದವರೆಗೆ<br>3. ವ್ಯಾಪಾರ ಪುನರ್ ಸ್ಥಾಪನೆ ಭತ್ಯೆ ರೂ.240/–ಪ್ರತಿ ಚ.ಅಡಿಗೆ.<br>4. ಬಾಡಿಗೆದಾರನು ಭೋಗ್ಯದ ಆವರಣದಲ್ಲಿ ಯಾವುದೇ ರೀತಿಯ ಕಟ್ಟಡ ನಿರ್ಮಾಣ ಮಾಡಿದ್ದಲ್ಲಿ, ಸದರಿ ಕಟ್ಟಡಕ್ಕೆ ಪರಿಹಾರ ನೀಡಲಾಗುವುದು.<br>5. ಬಾಡಿಗೆದಾರರಿಗೆ ಭೂಮಿಯ ಮೇಲಿನ ಪರಿಹಾರ ಧನ ಸಿಗುವುದಿಲ್ಲ. |

ನಅಇ 427 ಪಿಆರ್‌ಜೆ 2018

( ಜಿ. ಪರಮೇಶ್ವರ )
ಉಪ ಮುಖ್ಯಮಂತ್ರಿಗಳು